# ನಾನು ಆಯ್ಕೆ ಮಾಡುತ್ತೇನೆ
## ಲೇಖಕಿ ರೋಹಿಣಿ ಚಿಂತಾ

ಮಿತ್ತು ತನಗೆ ಪ್ರಿಯವಾದ ಆಲೂಗೆಡ್ಡೆ ಚಿಪ್ಸ್‌ನ ಪೊಟ್ಟಣವನ್ನು (ಪ್ಯಾಕನ್ನು) ಪರ್ರನೆ ಹರಿದು ತೆರೆದ, ಟೆಲಿವಿಷನ್ ಆನ್ ಮಾಡಿದ, ಶಾಲೆಯು ನೀಡಿದ ಯೋಜಿತ ಕೆಲಸ (ಪ್ರಾಜೆಕ್ಟ್)ವನ್ನು ಮಾಡಲು ಕುಳಿತ. ಅಂತರ್ಜಾಲವನ್ನು ಸ್ವಲ್ಪ ಸಮಯ ಜಾಲಾಡಿ, ಕೆಲವು ಪರಿಕಲ್ಪನೆಗಳನ್ನು ಬರೆದುಕೊಂಡ. ಬರೆದುಕೊಂಡದ್ದು ಸಮಾಧಾನ ನೀಡದ ಕಾರಣ ಹಾಳೆಯನ್ನು ಮುದುರಿ ಪಕ್ಕಕ್ಕಿರಿಸಿ, ಮತ್ತೆ ಮೊದಲಿನಿಂದ ಆರಂಭಿಸಿದ.

ತಾತ ಗೊಣಗಿದರು.

ಮಿತ್ತು ಅದನ್ನು ನಿರ್ಲಕ್ಷ್ಯಿಸಿ ತನ್ನ ಕೆಲಸವನ್ನು ಮುಂದುವರೆಸಿದ. ಮುಂದಿನ ಮೂವತ್ತು ನಿಮಿಷಗಳಲ್ಲಿ ಅವನು ಎರಡು ಪ್ಯಾಕೆಟ್ (ಪೊಟ್ಟಣ) ಚಿಪ್ಸ್ ತಿಂದು ಮುಗಿಸಿದ್ದ, 15 ಹಾಳೆಗಳನ್ನು ಉಂಡೆ ಉಂಡೆ ಮಾಡಿದ್ದ. ಟೆಲಿವಿಷನ್‌ನಲ್ಲಿ ಮೂರು ಚಾನಲ್‌ಗಳನ್ನು ಬದಲಾಯಿಸಿದ್ದ. ನಂತರ ಸ್ನೇಹಿತನಿಗೆ ಫೋನ್ ಮಾಡಲೆಂದು ತನ್ನ ಅಮ್ಮನ ಮೊಬೈಲ್ ಬಳಸಿದ.

ಈ ಬಾರಿ ತಾತ ಸ್ಪಷ್ಟವಾಗಿ ಕೇಳಿಸುವಂತೆಯೇ ಗೊಣಗಿದರು. "ಏನಾಯಿತು ಮಿತ್ತು?'

"ಏನು? ನನ್ನ ಸ್ನೇಹಿತ ಏನು ಮಾಡುತ್ತಿದ್ದಾನೆ ಎಂದು ತಿಳಿಯಲು ಬಯಸುತ್ತಿದ್ದೇನೆ ಅಷ್ಟೆ" ಎಂದ ಮಿತ್ತು ಫೋನ್ ಡಿಸ್‌ಕನೆಕ್ಟ್ ಮಾಡಿದ. "ನಾನು ಹೋಂ ವರ್ಕ್ ಮಾಡಲು ಪ್ರಯತ್ನಿಸುತ್ತಿದ್ದೇನೆ. ಸಹಾಯ ಮಾಡು, ಗೊಣಗಬೇಡ" ಎಂದು ಕೇಳಿಕೊಂಡ ಮಿತ್ತು.

"ಇಷ್ಟೊಂದು ಹಾಳೆಗಳನ್ನು ಮುದುರಿ ಇಷ್ಟೆಲ್ಲ ಕಸ ಮಾಡಬೇಕಾಗಿತ್ತೇನು? ಕೆಲಸ ಮಾಡುವಾಗ ಟೆಲಿವಿಷನ್ ಹಾಕಿಕೊಳ್ಳುವ ಅವಶ್ಯಕತೆ ಇದೆಯೇನು?" ತಾತ ಚುರುಕಾಗಿ ಉತ್ತರಿಸಿದರು. "ನೀನು ನಿನ್ನ ಸಮಯವನ್ನು ವ್ಯರ್ಥಗೊಳಿಸುತ್ತಿರುವೆ, ಜಾಗತಿಕ ತಾಪವರ್ಧನೆ ಹೆಚ್ಚಿಸುತ್ತಿರುವೆ ಹಾಗೂ ನಿನ್ನ ಇಂಗಾಲದ ಹೆಜ್ಜೆಗುರುತನ್ನು ಹೆಚ್ಚಿಸುತ್ತಿರುವೆ."

ಮಿತ್ತು ಏನೋ ಹೇಳಲು ಬಾಯಿ ತೆರೆದವನು ಥಟ್ಟನೆ ಸುಮ್ಮನಾದ.

"ಎಂತಹ ಜಾಗತಿಕ ತಾಪಮಾನ? ಯಾವ ಕಪ್ಪು ಹೆಜ್ಜೆಗುರುತುಗಳು" ಎಂದ ಮಿತ್ತು ನೆಲದ ಕಡೆಗೆ ದೃಷ್ಟಿ ಹರಿಸುತ್ತಾ "ಸ್ವಚ್ಛವಾಗಿಯೇ ಇದೆಯಲ್ಲ!" ಎಂದ.

"ನಾನು ಹೇಳಿದ್ದು ಇಂಗಾಲದ ಹೆಜ್ಜೆಗುರುತು, ಕಪ್ಪು ಹೆಜ್ಜೆಗುರುತಲ್ಲ. ನಿನ್ನ ಪ್ರತಿ ಚಟುವಟಿಕೆಯ ಕಾರಣದಿಂದ ಹೊರಮೊಮ್ಮಿ ವಾತಾವರಣಕ್ಕೆ ಸೇರುವ ಇಂಗಾಲಾಮ್ಲದ ಪ್ರಮಾಣವೇ ನಿನ್ನ ಇಂಗಾಲದ ಹೆಜ್ಜೆಗುರುತು ಆಗುತ್ತದೆ" ವಿವರಿಸಿದರು ತಾತ.

"ನನಗೆ ಅರ್ಥವಾಗಲಿಲ್ಲ" ಗೊಂದಲದ ದನಿಯಲ್ಲಿ ನುಡಿದ ಮಿತ್ತು.

"ಸರಿ. ವಿವರಿಸುತ್ತೇನೆ. ಈ ಮುದುರಿರುವ ಹಾಳೆಗಳನ್ನು ನೋಡು. ಇವು ಎಲ್ಲಿಂದ ಬರುತ್ತವೆ?"

"ಮರಗಳಿಂದ ಅಲ್ಲವೆ?" ಉತ್ತರಿಸಿದ ಮಿತ್ತು.

"ಹೌದು. ಮೊದಲನೆಯದಾಗಿ ಮರಗಳ ಕಡಿತ, ಕಾಡುಗಳ ನಿರ್ನಾಮ. ಮರಗಳು ಕಡಿಮೆಯಾದಷ್ಟೂ, ಇಂಗಾಲಾಮ್ಲವನ್ನು ಹೀರಿಕೊಳ್ಳುವ ಅವುಗಳು ಇಲ್ಲವಾಗುವ ಕಾರಣ ವಾತಾವರಣದಲ್ಲಿ ಇಂಗಾಲಾಮ್ಲವು ಹೆಚ್ಚಾಗುತ್ತದೆ. ದ್ಯುತಿ ಸಂಶ್ಲೇಷಣೆ(ಫೋಟೋಸಿಂಥೆಸಿಸ್) ನೆನಪಿದೆಯೇನು?"

ಮಿತ್ತು ತಲೆಯಾಡಿಸಿದ.

ತಾತ ಮುಂದುವರೆಸುತ್ತಾ "ಎರಡನೆಯ ಅಂಶ; ಕಡಿದ ಮರಗಳನ್ನು ವಾಹನಗಳಲ್ಲಿ ಕಾರ್ಖಾನೆಗೆ ಸಾಗಿಸುವುದು. ವಾಹನಗಳು ಚಲಿಸಲು ಪಳೆಯುಳಿಕೆಗಳಿಂದ ದೊರೆತ ಇಂಧನಗಳಾದ ಪೆಟ್ರೋಲ್ ಡೀಸೆಲ್ ಮುಂತಾದವನ್ನು ಬಳಸಲಾಗುತ್ತದೆ. ಪಳೆಯುಳಿಕೆ ಇಂಧನವನ್ನು ಸುಟ್ಟಾಗ ಉತ್ಪಾದನೆಯಾಗುವ ಇಂಗಾಲಾಮ್ಲವು ವಾತಾವರಣವನ್ನು ಸೇರುತ್ತದೆ. ಮೂರನೆಯ ಅಂಶ; ಆವಿ(ಹಬೆ) ಮತ್ತು ವಿದ್ಯುತ್ ಬಳಸಿ ಮರವನ್ನು ಕಾಗದ ಮಾಡುವ ಮೆದು ಪದಾರ್ಥ(ತಿಳ್ಳು)ವಾಗಿ ಸಂಸ್ಕರಿಸಲಾಗುತ್ತದೆ. ಆಮೇಲೆ ತಿಳ್ಳು ಮತ್ತು ಸಿದ್ಧಗೊಂಡ ಕಾಗದದ ಉತ್ಪನ್ನಗಳನ್ನು ವಾಹನಗಳಲ್ಲಿ ಸಾಗಿಸಲಾಗುತ್ತದೆ. ಇಲ್ಲಿ ಮತ್ತೆ ಇಂಗಾಲಾಮ್ಲವು ಬಿಡುಗಡೆಯಾಗುತ್ತದೆ."

"ಸಾಕು ತಾತ" ಮಿತ್ತು ಇದ್ದಕ್ಕಿದ್ದಂತೆ ನುಡಿದ, "ನನ್ನ ತಲೆ ಸುತ್ತುತ್ತಿದೆ. ಇಂಗಾಲಾಮ್ಲದ ಬಗ್ಗೆ ಇಷ್ಟೊಂದು ಮಾತೇಕೆ? ಪ್ರತಿ ಉಸಿರಿನಲ್ಲೂ ಕೊಂಚ ಇಂಗಾಲಾಮ್ಲವನ್ನು ನಾನು ಹೊರಬಿಡುತ್ತಲೇ ಇರುತ್ತೇನಲ್ಲ!"

"ಹೌದು"ನುಡಿದರು ತಾತ, "ಜೀವದಿಂದಿರಲು ನಾವೆಲ್ಲರೂ ಹಾಗೆ ಮಾಡುತ್ತೇವೆ. ಆಮ್ಲಜನಕವನ್ನು ಒಳಗೆಳೆದುಕೊಂಡು ಇಂಗಾಲಾಮ್ಲವನ್ನು ಹೊರಬಿಡುತ್ತೇವೆ. ನಾನು ಅದರ ಬಗ್ಗೆ ಹೇಳುತ್ತಿಲ್ಲ. ನಾವೆಲ್ಲರೂ ಸೇರಿ ವಾತಾವರಣಕ್ಕೆ ಹೆಚ್ಚುವರಿ ಇಂಗಾಲಾಮ್ಲವನ್ನು ಸೇರಿಸುತ್ತಿರಬಹುದಾದುದರ ಬಗ್ಗೆ ಹೇಳುತ್ತಿದ್ದೇನೆ. ಈ ಹೆಚ್ಚುವರಿ ಇಂಗಾಲಾಮ್ಲವೇ ಅಪಾಯಕಾರಿ."

"ಓಹೋ" ಮಿತ್ತು ನಿಧಾನವಾಗಿ ನುಡಿದ, "ಕಾಗದ ತಯಾರಿಕೆಯು ವಾತಾವರಣಕ್ಕೆ ಹೆಚ್ಚುವರಿ ಇಂಗಾಲಾಮ್ಲವನ್ನು ಬಿಡುಗಡೆ ಮಾಡುವುದೇನು?"

"ಹೌದು" ನುಡಿದರು ತಾತ, "ಕಾಗದವನ್ನು ವ್ಯರ್ಥಗೊಳಿಸುವುದರಿಂದ ನೀನು ಮತ್ತಷ್ಟು ಇಂಗಾಲಾಮ್ಲವನ್ನು ಬಿಡುಗಡೆ ಮಾಡುತ್ತಿರುವೆ."

"ಆದರೆ ನನ್ನ ಇಂಗಾಲದ ಹೆಜ್ಜೆಗುರುತು ಜಾಗತಿಕ ತಾಪವರ್ಧನೆಗೆ ಹೇಗೆ ಕಾರಣವಾಗುತ್ತದೆ?"

"ನೀನು ನಮ್ಮ ತೋಟದಲ್ಲಿರುವ ಹಸಿರುಗೃಹ(ಗ್ರೀನ್ ಹೌಸ್) ಅನ್ನು ಗಮನಿಸಿರುವೆಯೇನು?" ಕೇಳಿದರು ತಾತ.

"ಹೂಂ! ತೋಟದಲ್ಲಿರುವ ಗಾಜಿನ ಕೊಠಡಿ ತಾನೆ? ಅಮ್ಮ ಸೊಪ್ಪು ತರಕಾರಿಗಳನ್ನು ಬೆಳೆಯುವುದು ಅಲ್ಲಿಯೇ."

"ಹೌದು. ಆದರೆ ಆ ಕೊಠಡಿಗೆ ಗಾಜಿನ ಗೋಡೆಗಳು ಮತ್ತು ಗಾಜಿನ ಛಾವಣಿ ಇರುವುದು ಏಕೆಂದು ಗೊತ್ತೇನು?"

"ಯಾಕೆ?"

"ಆ ಕೊಠಡಿಯಲ್ಲಿ ಬೆಳೆಯುತ್ತಿರುವ ಸಸ್ಯಗಳು ನೀರಿನ ಆವಿ ಮತ್ತು ಇಂಗಾಲಾಮ್ಲಗಳನ್ನು ಹೊರಹೊಮ್ಮಿಸುತ್ತವೆ. ಅವು ಆ ಕೊಠಡಿಯಲ್ಲಿಯೇ ಬಂಧಿತವಾಗುತ್ತವೆ. ಈ ಅನಿಲಗಳು ಸೂರ್ಯನಿಂದ ಶಾಖವನ್ನು ಸೆಳೆದುಕೊಂಡು ಕೊಠಡಿಯನ್ನು ಬೆಚ್ಚಗೆ ಇರಿಸುತ್ತವೆ. ಆದ್ದರಿಂದಲೇ ನಾವು ಇಂಗಾಲಾಮ್ಲ ಮತ್ತು ನೀರಿನ ಆವಿಗಳನ್ನು **ಹಸಿರು ಗೃಹದ ಅನಿಲಗಳು** (ಜಿಹೆಚ್‌ಜಿ) ಎಂದು ಕರೆಯುತ್ತೇವೆ."

"ಅದಕ್ಕೂ ಜಾಗತಿಕ ತಾಪಮಾನ ಏರುವುದಕ್ಕೂ ಏನು ಸಂಬಂಧ?" ಮಿತ್ತು ಗೊಂದಲಕ್ಕೀಡಾಗಿದ್ದ.

"ಹಸಿರುಗೃಹವು ಒಂದು ಪುಟ್ಟ ಭೂಮಿ ಇದ್ದಂತೆ" ಹೇಳಿದರು ತಾತ, "ಭೂಮಿಯು ಸೂರ್ಯನಿಂದ ಶಾಖವನ್ನು ಹೀರಿಕೊಳ್ಳುತ್ತದೆ."

"ಅದು ಗೊತ್ತು...!" ತಾತನ ಮಾತನ್ನು ಮಧ್ಯದಲ್ಲೇ ತುಂಡರಿಸಿದ ಮಿತ್ತು, "ಹಾಗೆ ಹೀರಿದ ಶಾಖದಲ್ಲಿ ಕೊಂಚ ಅಂಶವು ನಮ್ಮ ಭೂಮಿ ಮತ್ತು ಸಮುದ್ರಗಳನ್ನು ಬೆಚ್ಚಗೆ ಇಡುತ್ತದೆ. ಮಿಕ್ಕ ಅಂಶವು ವಾತಾವರಣಕ್ಕೆ ಪ್ರತಿಫಲನವಾಗಿ ಸೇರಿಕೊಳ್ಳುತ್ತದೆ" ಮಿತ್ತು ನಿರೀಕ್ಷೆಯ ದೃಷ್ಟಿಯಿಂದ ತಾತನತ್ತ ನೋಡಿದ.

ತಾತ ಮುಗುಳ್ನಗುತ್ತಾ "ಸರಿಯಾಗಿ ಹೇಳಿದೆ. ಆದರೆ ಭೂಮಿಯ ಮೇಲ್ಭಾಗದಲ್ಲಿರುವ ವಾತಾವರಣದಲ್ಲಿ ಇರುವ ನೀರಿನ ಆವಿ ಮತ್ತು ಇಂಗಾಲಾಮ್ಲಗಳು ಹೊದಿಕೆಯಂತಹ ಒಂದು ರಕ್ಷಣಾ ಪದರವನ್ನು ನಿರ್ಮಿಸುತ್ತವೆ. ಅವು ಪ್ರತಿಫಲಿತ ಶಾಖದ ಕೊಂಚ ಅಂಶವನ್ನು ತಡೆಹಿಡಿಯುತ್ತವೆ. ಹೀಗಾಗಿ ಭೂಮಿಯು ಬೆಚ್ಚಗೆ ಇರುತ್ತದೆ."

"ಆದರೆ ಹಾಗೆ ತಡೆಹಿಡಿದ ಶಾಖವು ಭೂಮಿಯ ಮೇಲಿನ ಜೀವಿಗಳಿಗೆ ಅಧಾರ ಆಗುವುದಿಲ್ಲವೆ?" ಕೇಳಿದ ಮಿತ್ತು.

"ಆಗುತ್ತದೆ ಮಿತ್ತು. ಹಸಿರುಗೃಹದಲ್ಲಿ ಇರುವ ಶಾಖವು ಸಸ್ಯಗಳ ಬೆಳವಣಿಗೆಗೆ ನೆರವಾಗುವಂತೆಯೇ ಇದು ಸಹ ನೆರವಾಗುತ್ತದೆ. ಆದರೆ ವಾತಾವರಣದಲ್ಲಿ ಇಂಗಾಲಾಮ್ಲ ಮತ್ತು ನೀರಿನ ಆವಿಯ ಸಾಂದ್ರತೆ ಹೆಚ್ಚಿದಂತೆ ಮತ್ತಷ್ಟು ಶಾಖವು ಹಿಡಿದಿಡಲ್ಪಡುತ್ತದೆ. ಇದರಿಂದ ಜಾಗತಿಕ ಮಟ್ಟದಲ್ಲಿ ಶಾಖವು ಹೆಚ್ಚುತ್ತದೆ. ವಾತಾವರಣದಲ್ಲಿ ಈ ಅನಿಲಗಳ ಸಾಂದ್ರತೆಯು ನಮಗೆ ತಿಳಿದಂತೆ ಇರುವ ಅವುಗಳ ಸ್ವಾಭಾವಿಕ ಮಿತಿಯನ್ನು ಮೀರುತ್ತಾ ಸಾಗಿದಂತೆ ಅವು ಭೂಮಿಯ ಮೇಲ್ಮೈಯನ್ನು ಬಹಳ ಬಿಸಿ ಮಾಡಿಬಿಡುತ್ತವೆ. ಎಷ್ಟು ಬಿಸಿಯೆಂದರೆ, ಆ ಶಾಖಕ್ಕೆ ಭೂಮಿಯ ವಾತಾವರಣ ಬದಲಾಗಲು ಆರಂಭವಾಗುತ್ತದೆ."

"ಅದು ಸ್ವಾಭಾವಿಕವಲ್ಲವೆ?" ಕೇಳಿದ ಮಿತ್ತು. ಕೊಂಚ ಸಮಯದ ನಂತರ, "ವಾತಾವರಣದ ಬದಲಾವಣೆಯಿಂದ ನನಗೇನೂ ತೊಂದರೆಯಿಲ್ಲ. ನನಗೆ ಬೆಚ್ಚನೆಯ ನೀರು ಇಷ್ಟ" ಎಂದ.

"ಹೌದು ಮಿತ್ತು, ಈ ವಾತಾವರಣ ಬದಲಾವಣೆಯ ಆವರ್ತವು ಸ್ವಾಭಾವಿಕವಾದದ್ದೇ" ತಾತ ನಗುತ್ತಾ ನುಡಿದರು, "ಆದರೆ ನಮ್ಮ ಚಟುವಟಿಕೆಗಳ ತೀವ್ರತೆಯಿಂದ ಆ ಪ್ರಕ್ರಿಯೆಯನ್ನು ತ್ವರಿತಗೊಳಿಸುತ್ತಿದ್ದೇವೆ. ಉದಾಹರಣೆಗೆ, ಹಸಿರುಗೃಹದಲ್ಲಿ ಸಸ್ಯಗಳು ತಾವು ಈಗ ಪಡೆಯುತ್ತಿರುವ ಶಾಖವನ್ನು ಇಷ್ಟ ಪಡುತ್ತವೆ. ಆದರೆ ಹಸಿರುಗೃಹದ ಶಾಖ ಪದೇ ಪದೇ ಏರುತ್ತಲೇ ಹೋದರೆ ಸಸ್ಯಗಳ ಗತಿ ಏನಾಗಬಹುದೆಂದು ಕಲ್ಪನೆ ಮಾಡಿಕೊಳ್ಳಬಲ್ಲೆಯ? ಈಗ ನಾವು ಕಾಣುತ್ತಿರುವ ವಾತಾವರಣ ಬದಲಾವಣೆಯೂ ಅದೇ ತರಹದ್ದೇ. ನಮಗೆ ಅಭ್ಯಾಸವಾಗಿರುವ ತಾಪಕ್ಕೂ ಅದಕ್ಕೂ ವ್ಯತ್ಯಾಸವಿದೆ. ಈಗಿನ ಸರಾಸರಿ ಜಾಗತಿಕ ತಾಪಮಾನವು

ಕಳೆದ ಮಂಜುಯುಗದಲ್ಲಿ ಇದ್ದುದಕ್ಕಿಂತ 4–5 ಡಿಗ್ರಿ ಸೆಲ್ಸಿಯಸ್‌ನಷ್ಟು ಹೆಚ್ಚಿದೆ. ವಾತಾವರಣವು ಬದಲದಂತೆ, ಬೇಸಿಗೆಗಳು ತಡೆಯಲಾರದಷ್ಟು ಬಿಸಿಯಾಗುತ್ತವೆ. 2016ರ ಬೇಗೆಗಿಂತ ಹೆಚ್ಚಾಗುತ್ತವೆ."

"ಈವರೆಗಿನ ಅತಿ ತಾಪಮಾನದ ವರ್ಷವದು ಎಂದ ಮಿತ್ತು ವಾರ್ತಾಪತ್ರಿಕೆಗಳಲ್ಲಿ ತಾನು ಓದಿದ್ದ ಶೀರ್ಷಿಕೆಗಳನ್ನು ನೆನೆಯುತ್ತಾ.

"ಹೌದು. ಮಿತ್ತು, ಆ ವರ್ಷ ಭಾರತದಲ್ಲಿ 20,000 ಕ್ಕೂ ಹೆಚ್ಚು ಜನರು ಶಾಖ ತಡೆಯಲಾರದೆ ಮರಣ ಹೊಂದಿದ್ದರು ನೆನಪಿದೆಯೆ? ಶಾಖ ಹೆಚ್ಚಾದಾಗ ಹಾಗೆಯೇ ಆಗುವುದು. ಭೂಮಿ ಒಣಗಿಹೋಗುತ್ತದೆ. ನೀರು ದುರ್ಲಭವಾಗುತ್ತದೆ" ತಾತ ಮಾತಿಗೆ ಅಲ್ಪವಿರಾಮ ನೀಡಿದರು.

ಮಿತ್ತು ನಡುಗಿದ.

"ಅಷ್ಟೇ ಅಲ್ಲ ಮಿತ್ತು. ವಾತಾವರಣದ ಬದಲಾವಣೆಯು ಝಿಕಾ, ಕೋವಿಡ್–19ರಂತಹ ಸಾಂಕ್ರಾಮಿಕ ರೋಗಗಳ ಹರಡುವಿಕೆಯನ್ನೂ ಹೆಚ್ಚಿಸಬಹುದು. ತಂಪಾದ ಜಾಗಗಳಿಗೆ ವಲಸೆ ಹೋಗದಿರುವ ಪ್ರಾಣಿಗಳು ಸರ್ವನಾಶವಾಗಬಹುದು. ತಂಪಾದ ಜಾಗಗಳಿಗೆ ವಲಸೆ ಹೋದ ಪ್ರಾಣಿಗಳು ಕ್ರಿಮಿಕೀಟಗಳು, ತಮ್ಮನ್ನು ಬೇಟೆಯಾಡುವ ಪ್ರಾಣಿಗಳು ಮತ್ತು ಪ್ರತಿಸ್ಪರ್ಧಿ ಪ್ರಾಣಿಗಳಿಂದ ತೊಂದರೆಗಳನ್ನು ಎದುರಿಸಬಹುದು. ಅವು ಎಲ್ಲಿದ್ದವೋ ಅಲ್ಲಿಯೇ ಇದ್ದರೆ ಎದುರಿಸಬೇಕಾಗದ ಇವೆಲ್ಲ ತೊಂದರೆಗಳು ಅವುಗಳಿಗೆ ಎದುರಾಗುವುವು."

"ಮತ್ತೆ?" ಕೇಳಿದ ಮಿತ್ತು.

"ಮತ್ತೆ ವಿವಿಧ ಜಾತಿಯ ಜೀವಿಗಳು ಪರಸ್ಪರ ಹೇಗೆ ನಡೆದುಕೊಳ್ಳುತ್ತವೆ ಎನ್ನುವುದೂ ಬದಲಾಗುತ್ತದೆ. ಉದಾಹರಣೆಗೆ ಸ್ಪ್ರೂಸ್ ಮರಗಳ ಮೇಲೆ ತೊಗಟೆ ರೆಕ್ಕೆಹುಳಗಳು (ಬಾರ್ಕ್ ಬೀಟಲ್ಸ್) ಸಾಮಾನ್ಯವಾಗಿ ದಾಳಿ ಮಾಡುವುದಿಲ್ಲ. ಆದರೆ ಬದಲಾದ ವಾತಾವರಣವು ಮರದ ನೈಸರ್ಗಿಕ ರಕ್ಷಣಾಂಶಗಳನ್ನು ದುರ್ಬಲಗೊಳಿಸಿತು ಮತ್ತು ತೊಗಟೆ ರೆಕ್ಕೆಹುಳಗಳು ಅತಿ ಕಡಿಮೆ ಸಮಯದಲ್ಲಿ ಅತಿ ಹೆಚ್ಚು ಸಂಖ್ಯೆಯಾಗಿ ವರ್ಧಿಸಿ ಶೀಘ್ರವೇ ವಿಸ್ತೃತವಾಗಿ ಹರಡಿಕೊಂಡಿತು. ಪರಿಣಾಮ – ಈ ರೆಕ್ಕೆಹುಳಗಳು ಅಲಾಸ್ಕಾದಲ್ಲಿ ನಾಲ್ಕು ಮಿಲಿಯನ್ ಎಕರೆಗಳಷ್ಟು ವಿಸ್ತೀರ್ಣದಲ್ಲಿ ಬೆಳೆದಿದ್ದ ಅಷ್ಟೂ ಸ್ಪ್ರೂಸ್ ಮರಗಳನ್ನು ನಾಶಗೊಳಿಸಿದವು!"

"ಅಯ್ಯೋ! ಮರಗಳು ಕಡಿಮೆಯಾದವೆಂದರೆ ವಾತಾವರಣದಲ್ಲಿ ಹೆಚ್ಚು ಇಂಗಾಲಾಮ್ಲ ಎಂದೇ ಅರ್ಥ ಅಲ್ಲವೆ?" ಕೇಳಿದ ಮಿತ್ತು. ತಾತ ಹೌದೆಂದು ತಲೆಯಾಡಿಸಿದರು. "ಇದು ಭೂಮಿಯ ಸರಾಸರಿ ತಾಪಮಾನವನ್ನು ಮತ್ತಷ್ಟು ಹೆಚ್ಚಲು ಕಾರಣವಾಗುತ್ತದೆ ಮತ್ತು ವಾತಾವರಣದ ಬದಲಾವಣೆಯನ್ನು ವೇಗಗೊಳಿಸುತ್ತದೆ. ನೋಡಿದೆಯಾ? ಇದೊಂದು ವಿಷವರ್ತುಲ."

"ಅಷ್ಟೊಂದು ಶಾಖ ಹೆಚ್ಚಾದರೆ ನಾವು ಏರ್ ಕಂಡೀಷನರ್‌ಗಳನ್ನು ಚಾಲೂ ಮಾಡಿಕೊಳ್ಳಬಹುದೆ?" ತನ್ನದೇ ಪಟ್ಟನ್ನು ಮುಂದುವರೆಸಿದ ಮಿತ್ತು.

"ಓಹ್ ಮಿತ್ತು!" ತಾತ ಅನುಕಂಪದ ದನಿಯಲ್ಲಿ ನುಡಿದರು, "ಚಾಲೂ ಮಾಡಲು ಏನೇನೂ ಉಳಿದಿರುವುದಿಲ್ಲ. ತಾಪಮಾನ ಹೆಚ್ಚಿದಂತೆ ಹಿಮಗೆಡ್ಡೆಗಳು ಬೇಗನೆ ಕರಗಿಬಿಡುತ್ತವೆ. ಹೀಗೆ ಕರಗಿದ ಹಿಮಗೆಡ್ಡೆಗಳು ಮಿಲಿಯನ್‌ಗಟ್ಟಲೆ ಜನರಿಗೆ ಆಧಾರವಾಗಿರುವ ತಿಳಿನೀರಿನ ಮೂಲಗಳನ್ನು ಇಲ್ಲವಾಗಿಸಿಬಿಡುತ್ತವೆ. ಆಗ ಬಹುತೇಕ ಜನರಿಗೆ ಕುಡಿಯುವ ನೀರು, ವಿದ್ಯುತ್ ಎರಡೂ ದೊರಕುವುದಿಲ್ಲ."

"ನೀರಿಲ್ಲದಿದ್ದರೆ ನಮಗೆ ಹಸಿರು ಗೃಹವಾಗಲಿ, ತೋಟವಾಗಲಿ ಇರುವುದಿಲ್ಲ. ನಮ್ಮ ತೋಟದ ಮಾಲಿಗೆ ಕೆಲಸವೇ ಇರುವುದಿಲ್ಲ!" ಉದ್ಗರಿಸಿದ ಮಿತ್ತು.

"ವಸ್ತುಸ್ಥಿತಿ ಹೀಗೆಯೇ ಮುಂದುವರಿದರೆ ನಾವು ನಮ್ಮ ಮನೆಗಳನ್ನು ಬಿಟ್ಟು ಹೋಗಬೇಕಾಗಬಹುದು. ನಮ್ಮ ದೇಶವನ್ನೂ ಸಹ" ಹೇಳಿದರು ತಾತ.

"ಆದರೆ ನಾವು ಕಲ್ಲಿದ್ದಲನ್ನು ಸುಟ್ಟು ವಿದ್ಯುತ್ ಪಡೆಯಬಹುದಲ್ಲವೆ?"

"ಹೌದು, ಪಡೆಯಬಹುದು" ನುಡಿದರು ತಾತ, "ಆದರೆ ಕಲ್ಲಿದ್ದಲನ್ನು ಸುಟ್ಟು ವಿದ್ಯುತ್ ಉತ್ಪಾದನೆ ಮಾಡುವಾಗ ಮತ್ತಷ್ಟು ಇಂಗಾಲಾಮ್ಲವು ವಾತಾವರಣವನ್ನು ಸೇರುತ್ತದೆ. ಜಾಗತಿಕ ತಾಪಮಾನವು ಕೇವಲ ಕೆಲವೇ ಡಿಗ್ರಿಗಳಷ್ಟು ಹೆಚ್ಚಿದರೂ ಧ್ರುವಗಳಲ್ಲಿರುವ ಹಿಮಪದರವು ಕರಗಿಬಿಡುತ್ತದೆ. ಆಗ ಆರ್ಕ್‌ಟಿಕ್ಕೂ ಇಲ್ಲ, ಅಂಟಾರ್ಕ್‌ಟಿಕ್ಕೂ ಇಲ್ಲ!"

"ಏನು? ಹಾಗೇನದರೂ ಆದರೆ ಹಿಮಕರಡಿಯೂ ಇರುವುದಿಲ್ಲ. ಅಲ್ಲದೆ ಪೆಂಗ್ವಿನ್‌ಗಳೂ ಇರುವುದಿಲ್ಲ!" ಮಿತ್ತು ದಿಗ್ಭ್ರಮೆಯಿಂದ ನುಡಿದ. ಅವನ ಮನದಲ್ಲಿ ಕೆಲವು ದಿನಗಳ ಹಿಂದೆ ತಾನು ಟೆಲಿವಿಷನ್ನಿನಲ್ಲಿ ಕಂಡ ವನ್ಯಮೃಗಗಳ ಕಾರ್ಯಕ್ರಮದ ನೆನಪೊಂದು ಹಾದುಹೋಯಿತು.

“ಹಿಮಕರಡಿಯೂ ಇರುವುದಿಲ್ಲ, ಪೆಂಗ್ವಿನ್ನೂ ಇರುವುದಿಲ್ಲ, ನಾವೂ ಇರುವುದಿಲ್ಲ!” ಹೇಳಿದರು ತಾತ.

“ನಾವೂ ಇರುವುದಿಲ್ಲವೆ?” ಮಿತ್ತು ನಡುಗಿಹೋದ.

“ನಾವೂ ಇರುವುದಿಲ್ಲ” ತಾತ ವಿಷಾದದಿಂದ ನುಡಿದರು. ತಾವು ಹೇಳಿದುದು ಮಿತ್ತುವಿನ ಮನಸ್ಸಿಗೆ ನಾಟುವುದಕ್ಕೆ ಕೊಂಚ ಸಮಯ ನೀಡಿ ನಂತರ ಮುಂದುವರೆಸಿದರು, “ಏಕೆಂದರೆ ಕರಗಿದ ಹಿಮವೆಲ್ಲ ನಮ್ಮ ಸಮುದ್ರಗಳನ್ನು ಪ್ರವೇಶಿಸುತ್ತದೆ. ಸಮುದ್ರಮಟ್ಟವು ಏರಿ ಕರಾವಳಿ ಪ್ರದೇಶಗಳಲ್ಲಿ ಪ್ರವಾಹ ಏಳುತ್ತದೆ, ನಲ್ಲಿಯನ್ನು ಬಿಟ್ಟಿದ್ದಾಗ ಬಕೆಟ್‌ನಿಂದ ನೀರು ಹೊರಹರಿಯುವಂತೆಯೇ ಇಲ್ಲಿಯೂ ನೀರು ಎಲ್ಲೆಡೆಗೆ ಹರಿಯತೊಡಗುತ್ತದೆ. ಬಕೆಟ್ ನೀರು ಹೊರಹರಿವುದಕ್ಕೂ, ಸಮುದ್ರದ ನೀರು ಚಿಮ್ಮಿ ಬರುವುದಕ್ಕೂ ಒಂದೇ ವ್ಯತ್ಯಾಸವೆಂದರೆ ಸಮುದ್ರದ ನೀರು ನುಗ್ಗಿದ ಜಾಗಗಳಲ್ಲಿ ನಾವು ವಾಸಿಸುತ್ತಿರುತ್ತೇವೆ. ಪ್ರವಾಹವು ಸಸ್ಯಗಳು, ಪ್ರಾಣಿಗಳು, ಆಸ್ತಿಪಾಸ್ತಿ, ಜಮೀನುಗಳು ಮತ್ತು ಮನುಷ್ಯರನ್ನೂ ಧ್ವಂಸ ಮಾಡಿಬಿಡುತ್ತದೆ.”

“ಸರಿ” ಮಿತ್ತು ಧೈರ್ಯವಾಗಿ ನುಡಿದ, “ನಾನು ಇನ್ನುಮುಂದೆ ಕಾಗದವನ್ನು ಹಾಳು ಮಾಡುವುದಿಲ್ಲ. ಇದರಿಂದ ವಾತಾವರಣ ಬದಲಾಗುವುದು ನಿಲ್ಲುವುದೇನು?”

“ಕಾಗದ ಹಾಳು ಮಾಡುವುದು ಮತ್ತು ಪಳೆಯುಳಿಕೆಗಳ ಇಂಧನವನ್ನು ಕಾಗದ ಮತ್ತು ಕಾಗದದ ಉತ್ಪನ್ನಗಳ ಸಾಗಾಣಿಕೆಕಾಗಿ ಬಳಸುವುದು ವಾತಾವರಣದ ಬದಲಾವಣೆಯನ್ನು ಶೀಘ್ರಗೊಳಿಸುವ ಚಟುವಟಿಕೆಗಳ ಪೈಕಿ ಕೆಲವು ಉದಾಹರಣೆಗಳಷ್ಟೆ ಮಿತ್ತು” ಹೇಳಿದರು ತಾತ, “ವಿದ್ಯುತ್ ಉತ್ಪಾದನೆ, ಕೈಗಾರಿಕೆ ಮತ್ತು ವಾಹನಗಳು ಹೊರಡಿಸುವ ಮಾಲಿನ್ಯ, ಕೃಷಿಗಾಗಿ ಅರಣ್ಯವನ್ನು ನಾಶ ಮಾಡುವಿಕೆಯಂತಹ ಬೃಹತ್ ಪ್ರಮಾಣದ ಚಟುವಟಿಕೆಗಳು ಈ ಬದಲಾವಣೆಗೆ ಹೆಚ್ಚಿನ ಕೊಡುಗೆ ನೀಡುತ್ತವೆ.”

“ನಾವು ಇಂಗಾಲದ ಹೆಜ್ಜೆಗುರುತುಗಳನ್ನು ಹೇಗೆ ಕಡಿಮೆ ಮಾಡಬಹುದು ತಾತ?” ಕೇಳಿದ ಮಿತ್ತು. “ಪರಿಸ್ಥಿತಿಯು ವಿಕೋಪಕ್ಕೆ ಹೋಗದಂತೆ ಬದಲಾವಣೆ ತರಲು ನಾನು ಏನು ಮಾಡಬಹುದು?”

“ಸರಳವಾದ ಅಂಶಗಳನ್ನು ಅನುಸರಿಸು. ಉದಾಹರಣೆಗೆ, ಟೆಲಿವಿಷನ್ ನೋಡುವ ಸಮಯವನ್ನು ಕಡಿಮೆ ಮಾಡು, ಒಂದು ದಿನದ ಮಟ್ಟಿಗೆ ಏರ್ ಕಂಡೀಷನರ್ ಅನ್ನು ಉಪಯೋಗಿಸಬೇಡ. ಅಂತರ್ಜಾಲದಲ್ಲಿ ಜಾಲಾಡುವ ಬದಲು ಪುಸ್ತಕಗಳನ್ನು ಓದು. ಒಂದು ದಿವಸದ ಮಟ್ಟಿಗೆ ಫೋನನ್ನು ಬಳಸದೆ ಇರು. ಕಾರ್ ಪೂಲ್ ವ್ಯವಸ್ಥೆಯನ್ನು ಅಳವಡಿಸಿಕೊ. ಎಲ್‌ಇಡಿ ದೀಪಗಳನ್ನು ಬಳಸು. ಕಾಗದವನ್ನು ಮರುಬಳಕೆ ಮಾಡು. ಸಾವಯವ ತ್ಯಾಜ್ಯವನ್ನು ಮರುಬಳಕೆ ಮಾಡು...” ತಾತ ಒಂದು ಕ್ಷಣ ನಿಲ್ಲಿಸಿ ಮುಂದುವರೆದರು, “ನೀನು ಏನೇನು ಮಾಡಬಹುದೆಂಬುದನ್ನು ಯೋಚಿಸು ಮಿತ್ತು. ನಾವು ಹೆಚ್ಚು ಜವಾಬ್ದಾರರಾಗಲು ನಮ್ಮ ವೈಯಕ್ತಿಕ ಆಯ್ಕೆಗಳಿಂದಲೇ ಆರಂಭಿಸುವುದು ಸೂಕ್ತ.”

ಮಿತ್ತುವಿಗೆ ಈಗ ಆಯ್ಕೆ ತನ್ನದೇ ಎಂದು ತಿಳಿಯಿತು. “ಹಾಗಾದರೆ ನಾನು ಆಯ್ಕೆ ಮಾಡುತ್ತೇನೆ!” ಎಂದನವನು ಉತ್ಸಾಹದಿಂದ, “ನಾನು ಪರಿಸರವನ್ನು ಉಳಿಸುವ ಆಯ್ಕೆ ಮಾಡುತ್ತೇನೆ. ನಾನು ಭೂಮಿಯನ್ನು ಉಳಿಸುವ ಆಯ್ಕೆ ಮಾಡುತ್ತೇನೆ. ನಾನು ನಮ್ಮನ್ನು ಉಳಿಸುವ ಆಯ್ಕೆ ಮಾಡುತ್ತೇನೆ.”

“ಹೇಗೆ?” ಪ್ರಶ್ನಿಸಿದರು ತಾತ.

“ನಾನು ಶಾಲೆಗೆ ಸೈಕಲ್‌ನಲ್ಲಿ ಹೋಗುತ್ತೇನೆ ತಾತ” ಮಿತ್ತು ನುಡಿದ, “ಮತ್ತೆ ವಾರದಲ್ಲಿ ಕೆಲವು ದಿನಗಳು ನಾನು ಯಂತ್ರೋಪಕರಣಗಳನ್ನು ಬಳಸುವುದಿಲ್ಲ. ಒಂದು ದಿನ ಟೆಲಿವಿಷನ್ ನೋಡುವುದಿಲ್ಲ, ಒಂದು ದಿನ ಮೊಬೈಲ್ ಬಳಸುವುದಿಲ್ಲ!”

“ಅದು ಒಳ್ಳೆಯ ಆರಂಭ ಮಿತ್ತು” ತಾತ ನಗೆಯ ಸುಳಿವೂ ಇಲ್ಲದೆ ಮಿತ್ತುವಿನತ್ತ ನೋಡಿತ್ತಾ ನುಡಿದರು, “ಆದರೆ ಹಾಗೆ ಮಾಡಿದರೆ ನೀನು ಏನನ್ನು ಬಿಡುತ್ತೀಯೆ ಎಂದು ನಿನಗೆ ತಿಳಿದಿದೆಯೆ?”

“ಏನನ್ನು?”

“ವಾತಾವರಣದ ಮೇಲೆ ಒಂದು ಧನಾತ್ಮಕ ಪರಿಣಾಮ, ನಿನ್ನ ಇಂಗಾಲದ ಕೈಗುರುತುಗಳು!” ತಾತ ನಗುತ್ತಾ ನುಡಿದರು.

ಮಿತ್ತು ಸಂತೋಷದಿಂದ ಬೀಗಿದ. ಕೂಡಲೆ ಟೆಲಿವಿಷನ್ನನ್ನು ಆಫ್ ಮಾಡಿದ. ಮುದುರಿ ಉಂಡೆ ಕಟ್ಟಿ ಎಸೆದಿದ್ದ ಕಾಗದಗಳನ್ನು ಎತ್ತಿಕೊಂಡು ಅವುಗಳ ಮಡತೆಗಳನ್ನು ಕೈಯಿಂದ ತೀಡಿ ಹೋಗಲಾಡಿಸತೊಡಗಿದ. ಕೆಲವು ಕಾಗದಗಳನ್ನು ಮುಂದಿನ ದಿನಗಳಲ್ಲಿ ಬಳಸಲೆಂದು ಎತ್ತಿಟ್ಟುಕೊಂಡ. ಒಂದು ಕಾಗದದಲ್ಲಿ ಕೆಲವು ಪರಿಕಲ್ಪನೆಗಳನ್ನು ಗುರುತು ಹಾಕಿಕೊಂಡ. ತನ್ನ ಶಾಲಾ ಚಟುವಟಿಕೆಯನ್ನು ಮುಗಿಸಿದ ನಂತರ, ತನ್ನ ತಾತನ ಪಕ್ಕದಲ್ಲಿ ಕುಳಿತುಕೊಂಡು, ಸಂತೋಷದಿಂದ ಪೆಂಗ್ವಿನ್‌ಗಳ ಬಗ್ಗೆ ಇದ್ದ ಪುಸ್ತಕವೊಂದನ್ನು ತಿರುವಿಹಾಕತೊಡಗಿದ.

ಲೇಖಕಿಯ ಬಗ್ಗೆ

ರೋಹಿಣಿ ಚಿಂತಾ ಹೈದರಾಬಾದಿನ ಯೂನಿವರ್ಸಿಟ್ ಕಾಲೇಜ್ ಫಾರ್ ವಿಮೆನ್ ನಲ್ಲಿ ತಳಿಶಾಸ್ತ್ರ ಮತ್ತು ಜೈವಿಕತಂತ್ರಜ್ಞಾನ ವಿಭಾಗದಲ್ಲಿ ಉಪ ಪ್ರಾಧ್ಯಾಪಕರಾಗಿದ್ದಾರೆ. ಮಕ್ಕಳಿಗಾಗಿ ಲೇಖನಗಳನ್ನು ರಚಿಸುವುದರಲ್ಲಿ ಅಪಾರ ಆಸಕ್ತಿ ಹೊಂದಿರುವ ಇವರು 'ಸಂತೋಷಭರಿತ ಬಾಲ್ಯವು ಸಂತೋಷಭರಿತ ಸಮಾಜವನ್ನು ಸೃಷ್ಟಿಸುತ್ತದೆ' ಎಂಬ ನಂಬಿಕೆಗೆ ಬದ್ಧರಾಗಿದ್ದಾರೆ. ಮಕ್ಕಳಿಗಾಗಿ ಅವರು ಬರೆದ ಸುಮಾರು 85 ಕಥೆಗಳು ವಿವಿಧ ಪತ್ರಿಕೆಗಳಲ್ಲಿ ಪ್ರಕಟವಾಗಿವೆ. ಅವರ ಕಾರ್ಯಗಳನ್ನು ಅರಿತುಕೊಳ್ಳಲು ಅವರ ಜಾಲತಾಣಕ್ಕೆ ಭೇಟಿ ನೀಡಿ. ಅವರ ಸಂಪರ್ಕ ಕೊಂಡಿ: www.popscicles.com

ಚಿತ್ರಗಳು ಮತ್ತು ವಿನ್ಯಾಸ: ವಿದ್ಯಾ ಕಮಲೇಶ್.